ನಂ - 223

# ನಾಡ ನುಡಿಗಳು

(ಭಾಗ ೧)

---

೧ ಗಾದೆ ವೇದಕ್ಕೆ ಸಮಾನ.

೨ ತಾಗಿ ಬಾಗುವ ಮುನ್ನ ಬಾಗಿ ನಡೆವುದೆ ಲೇಸು.

೩ ಹಂಗಿನ ಅರಮನೆಗಿಂತ ವಿಂಗಡದ ಗುಡಿ ಲೇಸು.

೪ ಪಾಪಮಾಡಿ ಏಳುವುದಕ್ಕಿಂತ, ಪುಣ್ಯಮಾಡಿ ಬೀಳುವುದು ಲೇಸು.

೫ ಆನೆಯಾಗಿ ಸೊಪ್ಪು ತಿನ್ನುವುದಕ್ಕಿಂತ, ಇರುವೆಯಾಗಿ ಸಕ್ಕರೆ ತಿನ್ನುವುದು ಲೇಸು.

೬ ಇಲಿಯಾಗಿ ನೂರು ವರ್ಷ ಬಾಳುವುದಕ್ಕಿಂತ, ಹುಲಿಯಾಗಿ ಮೂರು ನಿಮಿಷ ಬಾಳುವುದು ಲೇಸು.

೭ ಬಿತ್ತಿ ಬೆಳೆಸುವುದಕ್ಕಿಂತ ಕಿತ್ತು ನೆಡುವುದು ಲೇಸು.

೮ ಸೆಗಣಿಯವನ ಕೂಡೆ ಸ್ನೇಹಕ್ಕಿಂತ, ಗಂಧದವನ ಕೂಡೆ ಜಗಳ ಲೇಸು.

೯ ತಾನು ಸಾಯಬೇಕು, ಸ್ವರ್ಗ ಪಡೆಯಬೇಕು.

೧೦ ತಣ್ಣೀರನ್ನಾದರೂ ತಣಿಸಿ ಕುಡಿಯಬೇಕು.

೧೧ ಕುಲ ನೋಡಿ ಹೆಣ್ಣು ಕೊಡಬೇಕು; ಮರ ನೋಡಿ ಬಳ್ಳಿ ನೆಡಬೇಕು.

೧೨ ಮುಳ್ಳನ್ನು ಮುಳ್ಳಿನಿಂದಲೇ ತೆಗೆಯಬೇಕು.

೧೩ ಒಕ್ಕಣ್ಣ ರಾಜ್ಯಕ್ಕೆ ಹೋದರೆ, ಒಂದು ಕಣ್ಣು ಮುಚ್ಚಿಕೊಳ್ಳಬೇಕು.

೧೪ ಎಮ್ಮೆ ಕರು ಸಾಯಬೇಕು; ಗಂಡನ ತಾಯಿ ಸಾಯಬೇಕು.

೧೫ ಮಗಳು ಮುಂಡೆಯಾದರೂ, ಅಳಿಯನ ಅಳವು ನೋಡಲೇ ಬೇಕು.

೧೬ ಅರಸಾಗಿ ಉಣ್ಣಬೇಕು; ಆಳಾಗಿ ದುಡಿಯಬೇಕು.

೧೭ ಚಟ್ಟಾಗಲೀ ಹೊಟ್ಟಾಗಲೀ ತನ್ನ ಗದ್ದೆಯಲ್ಲಿ ಬೆಳೆಯಬೇಕು; ಕೆಪ್ಪಾಗಲೀ ಕುರುಡಾಗಲೀ ತನ್ನ ಹೊಟ್ಟೆಯಲ್ಲಿ ಹುಟ್ಟಬೇಕು.

೧೮ ನೊಣ ತಿಂದು ಕುಲ ಕೆಡಬಾರದು; ಕುಲ ಕೆಟ್ಟರೂ ಸುಖ ಪಡೆಯ ಬೇಕು.

೧೯ ಕತ್ತೆ ಕೆಲಸ ಕತ್ತೆ ಮಾಡಬೇಕು; ನಾಯಿ ಕೆಲಸ ನಾಯಿ ಮಾಡ ಬೇಕು.

೨೦ ದೇಶಾಂತರ ಹೋದರೂ ಸ್ವಾತಂತ್ರ್ಯವಿರಬೇಕು.

೨೧ ಕಾಲಿನಲ್ಲಿ ಇರುವುದು ಕಾಲಿನಲ್ಲಿ, ತಲೆಯಲ್ಲಿ ಇರುವುದು ತಲೆಯಲ್ಲಿ ಇರಬೇಕು.

೨೨ ಬಂಗಾರವನ್ನು ಬೆಂಕಿಯಲ್ಲಿ ಪರೀಕ್ಷಿಸಬೇಕು; ಸ್ನೇಹಿತರನ್ನು ಕಷ್ಟ ದಲ್ಲಿ ಪರೀಕ್ಷಿಸಬೇಕು.

೨೩ ಆಡಿ ತಪ್ಪಬೇಡ, ಓಡಿ ಸಿಕ್ಕಬೇಡ.

೨೪ ಅರಮನೆಯ ಮುಂದಿರಬೇಡ; ಕುದುರೆಯ ಹಿಂದಿರಬೇಕು.

೨೫ ಉಂಡವ ಹರಸುವುದು ಬೇಡ; ನೊಂದವ ಶಪಿಸುವುದು ಬೇಡ.

೨೬ ಉಂಡ ಮನೆಯ ಗಳ ಎಣಿಸಬೇಡ.

೨೭ ತಲೆ ಬೋಳಿಸಿಕೊಂಡು ದಿನ ಕೇಳಬೇಡ.

೨೮ ಅಡಿಗೆ ಮಾಡುವವನಿಗೆ ಹೆಂಡತಿ ಬೇಡ, ಹೊರೆ ಹೊರುವವನಿಗೆ ಆಳು ಬೇಡ.

೨೯ ಹೊಲಿಯುವವನ ಬಲ ಬದಿಗಿರಬೇಡ, ಅಳುವವನ ಎಡ ಬದಿಗಿರ ಬೇಡ.

೩೦ ಮಳೆ ಬಿಟ್ಟ ಮೇಲೆ ಮರದಡಿ ಹೋಗಬೇಡ; ತಾಯಿ ಸತ್ತಮೇಲೆ ತವರುಮನೆಗೆ ಹೋಗಬೇಡ.

೩೧ ಇಲ್ಲದುದನ್ನು ಆಶಿಸಬೇಡ; ಇದ್ದುದನ್ನು ಕಳೆಯಬೇಡ.

೩೨ ಅಳುವ ಹೆಂಗಸನ್ನು ನಂಬಬೇಡ; ನಗುವ ಗಂಡನನ್ನು ನಂಬಬೇಡ.

೩೩ ಮೇಲೆ ಬಿದ್ದು ಬರುವ ಸೂಳೆ ಮೂರು ಕಾಸಿಗೂ ಬೇಡ.

೩೪ ಮಾತಾಡಿ ಪೋಕನೆನಿಸಿಕೊಳ್ಳುವುದಕ್ಕಿಂತ, ಮಾತಾಡದೆ ಮೂಕನೆನಿ ಸಿಕೊಳ್ಳುವುದು ಉತ್ತಮ.

೩೫ ಮುತ್ತಿಗಿಂತ ಹೊತ್ತು ಉತ್ತಮ.

೩೬ ಯುಕ್ತಿ ಭಾಷೆಗಿಂತ ಸ್ಪಷ್ಟ ಭಾಷೆ ಉತ್ತಮ.

೩೭ ಕೆಟ್ಟವರ ಸಹವಾಸಕ್ಕಿಂತ ಏಕಾಂಕಿಯಾಗಿರುವುದು ಮೇಲು.

೩೮ ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲ.

೩೯ ಹೆಸರಿಗೆ ಹೊನ್ನಯ್ಯ ಹೆಗ್ಡೆ, ಎಸರಿಗೆ ಅಕ್ಕಿಯಿಲ್ಲ.

೪೦ ಮಾತು ಬಲ್ಲವನಿಗೆ ಜಗಳವಿಲ್ಲ; ಊಟ ಬಲ್ಲವನಿಗೆ ರೋಗವಿಲ್ಲ.

೪೧ ಹಡಗ ತುಂಬಲು ಹೋದವ ಬಂದ; ಹೊಟ್ಟೆ ತುಂಬಲು ಹೋದವ ಬರಲಿಲ್ಲ.

೪೨ ತುಂಬಿದ ಕೊಡ ತುಳುಕುವುದಿಲ್ಲ; ಅರ್ಧ ಕೊಡ ನಿಲ್ಲುವುದಿಲ್ಲ.

೪೩ ಮಿಂಚಿ ಹೋದ ಕಾರ್ಯಕ್ಕೆ ಚಿಂತಿಸಿ ಫಲವಿಲ್ಲ.

೪೪ ಉಪ್ಪಿಗಿಂತ ರುಚಿಯಿಲ್ಲ; ತಾಯಿಗಿಂತ ಬಂಧುವಿಲ್ಲ,

೪೫ ಭಕ್ತಿಯಿಲ್ಲದೆ ಮುಕ್ತಿಯಿಲ್ಲ.

೪೬ ಕಾಮಕ್ಕೆ ಕಣ್ಣಿಲ್ಲ; ಅಂತಃಕರಣಕ್ಕೆ ನಾಚಿಕೆಯಿಲ್ಲ.

೪೭ ಹೆಸರು ಗಂಗಾಭವಾನಿ; ಕುಡಿಯಲಿಕ್ಕೆ ನೀರೇ ಇಲ್ಲ.

೪೮ ಕಜ್ಜಿ ಹಿಡಿದವನಿಗೆ ಲಜ್ಜೆಯಿಲ್ಲ; ಮೂಗು ಕೊಳಕನಿಗೆ ನಾತವಿಲ್ಲ.

೪೯ ಜಾರೆಗೆ ಜಾತಿಯಿಲ್ಲ; ಮಾರಿಗೆ ಕರುಣೆಯಿಲ್ಲ.

೫೦ ಕತ್ತೆ ಮೇಡಲ್ಲಿ ಮತ್ತೆ ಮೇವಿಲ್ಲ.

೫೧ ನರಕದಲ್ಲಿ ಸ್ನೇಹಿತರಿಲ್ಲ; ಸ್ವರ್ಗದಲ್ಲಿ ಕಷ್ಟವಿಲ್ಲ.

೫೨ ಕಡಲೆ ಇರುವಾಗ ಹಲ್ಲಿಲ್ಲ; ಹಲ್ಲಿರುವಾಗ ಕಡಲೆಯಿಲ್ಲ.

೫೩ ಬಂದ ದಾರಿಗೆ ಸುಂಕವಿಲ್ಲ.

೫೪ ನಯವಿದ್ದಲ್ಲಿ ಭಯವಿಲ್ಲ; ಸತ್ಯಕ್ಕೆ ಸಾವಿಲ್ಲ.

೫೫ ಚಂದಕ್ಕೆ ಬಳೆ ತೊಟ್ಟರೆ, ಮತ್ತೆ ಕೊಡುಕಿದರೂ ಹೋಗುವುದಿಲ್ಲ.

೫೬ ಕಚ್ಚುವ ನಾಯಿ ಬೊಗಳುವುದಿಲ್ಲ; ಬೊಗಳುವ ನಾಯಿ ಕಚ್ಚುವುದಿಲ್ಲ.

೫೭ ಹೊಟ್ಟೆಯೊಳಗಿನ ಸಿಟ್ಟು ರಟ್ಟೆಯೊಳಗಿಲ್ಲ.

೫೮ ಎಲ್ಲಾ ಬಲ್ಲ, ಏನೂ ಇಲ್ಲ.

೫೯ ಚಾಕರಿ ಮಾಡಿದ ಹೊರತು ರೊಟ್ಟಿ ಸಿಕ್ಕುವುದಿಲ್ಲ.

೬೦ ಸಮುದ್ರದ ಕೂಗನ್ನು ನಿಲ್ಲಿಸಬಹುದು; ಜನರ ನಾಲಗೆಯ ಕೂಗನ್ನು ನಿಲ್ಲಿಸಲು ಸಾಧ್ಯವಿಲ್ಲ.

೬೧ ದಾಕ್ಷಿಣ್ಯಕ್ಕೆ ಬಸುರಿಯಾದರೆ ಹೆರಲು ಸ್ಥಳವಿಲ್ಲ.

೬೨ ರಾಮೇಶ್ವರಕ್ಕೆ ಹೋದರೂ, ಶನೇಶ್ವರನ ಕಾಟ ತಪ್ಪಲಿಲ್ಲ.

೧೩ ಅನುಭವಕ್ಕಿಂತ ಹೆಚ್ಚಿನ ಬೋಧಕನಿಲ್ಲ.
೧೪ ಉತ್ತಮ ಪುಸ್ತಕಕ್ಕಿಂತ ಹೆಚ್ಚಿನ ಸ್ನೇಹಿತರಿಲ್ಲ.
೧೫ ಸತ್ತ ಎಮ್ಮೆಗೆ ಕ್ರಯವಿಲ್ಲ.
೧೬ ಮೂರ್ತಿ ಸಣ್ಣದಾದರೂ ಕೀರ್ತಿ ದೊಡ್ಡದು.
೧೭ ಬೆಳ್ಳಗಿರುವುದೆಲ್ಲ ಹಾಲಲ್ಲ; ತೆಳ್ಳಗಿರುವುದೆಲ್ಲ ನೀರಲ್ಲ.
೧೮ ಕುದುರೆಯನ್ನು ನೀರಿಗಿಳಿಸುವ ಕೆಲಸ ನಮ್ಮದು; ನೀರು ಕುಡಿಯುವ ಕೆಲಸ ನಮ್ಮದಲ್ಲ.
೧೯ ಮಕ್ಕಳಿಲ್ಲದೆ ಮನೆಯಲ್ಲ, ಹಕ್ಕಿಯಿಲ್ಲದೆ ವನವಲ್ಲ.
೨೦ ಕತ್ತಿಯಿಂದಾದ ಗಾಯ ಮಾಸುತ್ತದೆ; ನಾಲಗೆಯಿಂದಾದ ಗಾಯ ಮಾಸುವುದಿಲ್ಲ.
೨೧ ಮರಣಕಾಲಕ್ಕೆ ಸ್ಮೃತಿಯಿಲ್ಲ; ಕೆಡುವ ಕಾಲಕ್ಕೆ ಮತಿಯಿಲ್ಲ.
೨೨ ಕಾಶಿಗೆ ಹೊರಟವನಿಗೆ ದಾರಿಯಲ್ಲೇ ವಿಶ್ವನಾಥ ಕಾಣಸಿಕ್ಕಿದನು.
೨೩ ಅಡಿಕೆಮರ ಹತ್ತುವವನನ್ನು ಎಷ್ಟು ಎತ್ತಬಹುದು?
೨೪ ನಾಯಿ ಬೊಗಳಿದರೆ ದೇವಲೋಕ ಹಾಳಾದೀತೇ?
೨೫ ನಾಯಿ ಕಚ್ಚಿದರೆ ನಾವು ನಾಯಿಕಾಲನ್ನು ಕಚ್ಚುವುದೇ?
೨೬ ಸೌಟು ಇರುವಾಗ ಕೈ ಸುಟ್ಟುಕೊಳ್ಳುವುದೇ?
೨೭ ಅಕ್ಕಿಕೊಟ್ಟು ಉಣಬೇಕಾದರೆ, ಅಕ್ಕನ ಹಂಗೇನು?
೨೮ ಹೋರಿಕೋಡಿನಲ್ಲಿ ಜೇನು ಇದ್ದರೇನು, ಇಲ್ಲದಿದ್ದರೇನು?
೨೯ ಕಪ್ಪೆಗೆ ಕಣ್ಣು ಹೋದರೆ, 'ಕೇರೆ'ಗೆ ಆದ ನಷ್ಟವೇನು?
೩೦ ಊಟಕ್ಕಿಲ್ಲದ ಉಪ್ಪಿನಕಾಯಿ ಮತ್ತೇತಕ್ಕೆ?
೩೧ ಹುಲಿಗೆ ಒಂದು ಹುಂಡು ಹೆಚ್ಚೆ?
೩೨ ಇಡಿ ಮುಳುಗಿದವನಿಗೆ ಚಳಿಯೇನು?
೩೩ ಆ, ಆ, ಬಾರದವನಿಗೆ ಅಮರ ಬಂದೀತೆ?
೩೪ ಅಂಗೈ ತೋರಿಸಿ ಅವಲಕ್ಷಣ ಹೇಳಿಸಿಕೊಳ್ಳುವುದೇ?
೩೫ ಹಿಪ್ಪಕಟ್ಟುಕೆ (ಅಳುವ ತಯಾರಿ) ಇಷ್ಟು ಹೊತ್ತಾದರೆ, ಮರ್ಳುಕೆ (ಅಳಲಿಕ್ಕೆ) ಎಷ್ಟು ಹೊತ್ತು?
೩೬ ಊರಿಗೆ ಬಂದದ್ದು ಕೇರಿಗೆ ಬಾರದೆ ಹೋಗುತ್ತದೆಯೇ?
೩೭ ಅಪ್ಪನಿಗೆ ಮಗ ಬೇಡ, ಅಜ್ಜನಿಗೆ ಮೊಮ್ಮಗ ಬೇಕೆ?

೮೮ ಹುಟ್ಟಿಸಿದ ದೇವರು ಹುಲ್ಲು ಮೇಯಿಸುತ್ತಾನೆಯೋ?
೮೯ ನಾಯಿ ಹೊಡೆಯಲಿಕ್ಕೆ ಬಣ್ಣದ ಕೋಲು ಬೇಕೇ?
೯೦ ಉರಿಯಿಲ್ಲದೆ ಹೊಗೆ ಹೊರಟೀತೇ?
೯೧ ಅಂಗಿ ತೊಡಿಸಿದರೆ ಮಂಗ ಮುಚ್ಚೀತೇ?
೯೨ ಚರ್ಮ ತೊಳೆದರೆ ಕರ್ಮ ಹೋಗುವುದೇ?
೯೩ ಸತ್ತ ಹೆಣ ಎತ್ತ ಬಿದ್ದರೇನು?
೯೪ ಗಿಡವಿದ್ದಾಗ ಬಗ್ಗದ್ದು ಮರವಾದಾಗ ಬಗ್ಗೀತೇ?
೯೫ ಹೋರಿ ತಿಂಬ ಹುಲಿ ಕರುವಿಗೆ ದಾರಿ ಬಿಟ್ಟೀತೇ?
೯೬ ಅಕ್ಕಿ ತಿಂಬ ಬೆಕ್ಕಿಗೆ ಅರಸು ಸಿಂಹನ ಸಂಗವೇ?
೯೭ ಹುಲಿಮರಿ ಹುಲ್ಲು ಮೇಯುತ್ತದೆಯೋ?
೯೮ ಸುಂಕದವನ ಕೈಯಲ್ಲಿ ಸುಖದುಃಖವೇ?
೯೯ ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರ ಬಿಡುವುದೇ?
೧೦೦ ಕಾಯುವವರ ಜಾಗ್ರತೆಯೋ, ಕದಿಯುವವರ ಜಾಗ್ರತೆಯೋ?
೧೦೧ ಉಣದೆ ಇದ್ದವನ ಹಸಿವೆ ಉಂಡವನಿಗೆ ಏನು ಗೊತ್ತು?
೧೦೨ ಕೆರೆಯಲ್ಲಿದ್ದ ಕಪ್ಪೆ ನೀರು ಕುಡಿಯುತ್ತದೋ ಬಿಡುತ್ತದೋ ಏನು ಗೊತ್ತು?
೧೦೩ ಹೆಣದ ಮೇಲೆ ಹೆಜ್ಜೆಯಿಡುವುದೇ?
೧೦೪ ನಾಯಿಯನ್ನು ಕಾಣುವುದೋ, ನಾಯಿ ಸಾಕಿದವರನ್ನು ಕಾಣುವುದೋ?
೧೦೫ ಹಪ್ಪಳ ಮುರಿಯಬೇಕಾದರೆ ದೊಗ್ಗಾಲು (ಮೊಣಕಾಲು) ಹಾಕಬೇಕೇ?
೧೦೬ ಕಬ್ಬು ಡೊಂಕಾದರೆ, ಸಿಹಿ ಡೊಂಕೇ?
೧೦೭ ಮರವು ಹಳತಾದರೆ ಹುಳಿಯು ಹಳತಾಗುವುದೇ?
೧೦೮ ಮನೆಗೆ ಬೆಂಕಿ ಹಿಡಿದರೆ ಮರದಡಿ ನಿಲ್ಲಬಹುದು; ಹೊಟ್ಟೆಗೆ ಬೆಂಕಿ ಹಿಡಿದರೆ?
೧೦೯ ಕರಡಿಗೆ ಕೂದಲು ಯಾವುದು, ರೋಮ ಯಾವುದು?
೧೧೦ ಯಾರು ಮುತ್ತು ಕೊಟ್ಟರೂ, ಚೇಳು ಮುತ್ತು ಕೊಟ್ಟೀತೇ?
೧೧೧ ನಾಯಿಗೆ ಉಪ್ಪಿನಕಾಯಿ ಯಾಕೆ?

೧೧೨ ಅಷ್ಟಂತವರು ಬಂದು ತಲೆ ಹತ್ತಿರ ಕುಳಿತುಕೊಂಡರೆ, ಅಕ್ಕ ಎಂಥ ಹೇಳುವುದಾ, ಆಗ ಎಂಥ ಹೇಳುವುದಾ?

೧೧೩ ಅವುಟೆಕಾಯಿ ಇಲ್ಲದೆ ಔತಣ ನಿಲ್ಲುವುದೇ?

೧೧೪ ಆನೆ ಕೊರಳಿಗೆ ಘಂಟೆ ಕಟ್ಟಬೇಕೇ?

೧೧೫ ಮನಸ್ಸಿನೊಳಗೇ ಮಂಡಿಗೆ ತಿಂದರೆ, ಗೋಧಿಯ ಕ್ರಯ ಕೊಡುವವರು ಯಾರು?

೧೧೬ ಓಡಿನಲ್ಲಿ (ಒಡೆದ ಮಡಕೆ ಚೂರು) ಉಂಬವನಿಗೆ ಹರಿವಾಣವೇಕೆ?

೧೧೭ ಹೇಳಿಕೊಟ್ಟ ಮಾತು, ಕಟ್ಟಿಕೊಟ್ಟ ಬುತ್ತಿ ಎಷ್ಟರ ತನಕ ಬರಬಹುದು?

೧೧೮ ಜ್ಞಾನವಂತರಿಗೆ ಸ್ನಾನವೇಕೆ?

೧೧೯ ಅಂದಿನ ಮದುವೆಗೆ ಇಂದಿನ ವಾದ್ಯವೇಕೆ?

೧೨೦ ಮಾಣಿಕ್ಯದ ಬೆಲೆ ಕೋತಿಗೇನು ಗೊತ್ತು?

೧೨೧ ಇಲಿಗೆ ಕಬ್ಬಿಣದ ಕೆಲಸವೇಕೆ?

೧೨೨ ಹೊಳೆ ಡೊಂಕಾದರೆ ನೀರು ಡೊಂಕೆ?

೧೨೩ ಹುಡುಗ ಬುದ್ಧಿಯೋ, ನೆಗೆದು ಬಿದ್ದಿಯೋ?

೧೨೪ ಮೂಗಿನಿಂದ ಉಂಡರೆ ಹೊಟ್ಟೆ ತುಂಬುವುದೇ?

೧೨೫ ಮಜ್ಜಿಗೆ ಕಡೆದರೆ ಬೆಣ್ಣೆ ಬರುವುದು; ನೀರು ಕಡೆದರೆ ಏನು ಬರುವುದು?

೧೨೬ ಕುರುಡನಿಗೆ ದೀಪ ಬೇಡವಾದರೆ,ಮನೆಮಂದಿಗೆಲ್ಲಾ ದೀಪ ಬೇಡವೇ?

೧೨೭ ಬೂದಿ ಕುಂಬಳಕಾಯಿ ಕದ್ದವರು ಯಾರು ಎಂದಾಗ, ಹೆಗಲು ಮುಟ್ಟಿ ನೋಡಿದನಂತೆ.

೧೨೮ ಸುಮ್ಮನೆ ತಿನ್ನು ಮಾಣಿ ಎಂದರೆ, "ಓಣಿ ಮುಕ್ಕಿ ಹಣ್ಣು ಅಪ್ಪಯ್ಯ" ಎಂದನಂತೆ.

೧೨೯ ಹುಡುಕುವ ಬಳ್ಳಿಯೇ ಕಾಲಿಗೆ ತಗಲಿದಂತೆ.

೧೩೦ ಒರಳಿನಲ್ಲಿ ಕುಳಿತು ಒನಕೆ ಪೆಟ್ಟನ್ನು ತಪ್ಪಿಸಬಹುದೇ?

೧೩೧ ಮನೆಯ ಮಜ್ಜಿಗೆ ಮರದಡಿ ಕುಡಿದ ಹಾಗೆ.

೧೩೨ ಮಜ್ಜಿಗೆಯೊಳಗೆ ಮಾವಿನ ಮಿಡಿ ಓಡಾಡಿದಂತೆ.

೧೩೩ ಮಜ್ಜಿಗೆಗೆ ಬಂದವನು ಎಮ್ಮೆ ಕ್ರಯ ಕೇಳಿದ ಹಾಗೆ.

೧೩೪ ಓಡಲಿಕ್ಕೆ ಆಗದಿದ್ದವಳು ಒರಳು ಹೊತ್ತುಕೊಂಡು ಓಡ್ಯಾಳೆ?
೧೩೫ ಕರಿದುಂಬ ಮೊಲೆ ಕೊಯ್ಯುದ್ದಣ್ಣವರೆ?
೧೩೬ ದೊಡ್ಡ ಗುಡ್ಡ ಹರಡಿ, ಸಣ್ಣ ಇಲಿ ಹಿಡಿಯುವಂತೆ.
೧೩೭ ರಾತ್ರಿ ಕಂಡ ಬಾವಿಗೆ ಹಗಲಲ್ಲಿ ಬಿದ್ದಂತೆ.
೧೩೮ ಕಂಡವರ ಹಿಟ್ಟಿಗೆ ಕಾಯಿ ಹಾಲು ತಯಾರಿಸುವಂತೆ.
೧೩೯ ಸತ್ತ ಎಮ್ಮೆ ಹತ್ತು ಹಾನೆ ಹಾಲು ಕೊಡುತ್ತದೆ.
೧೪೦ ಎಲ್ಲರೂ ಯಾತ್ರೆಗೆ ಹೋಗುತ್ತಾರಂತ, ಶಾನಾಡಿ ನಾಯಿಯೂ ಹೋಯಿತಂತೆ.
೧೪೧ ಶಿವಪೂಜೆಯಲ್ಲಿ ಕರಡಿ ಅಡ್ಡಬಂದಂತೆ.
೧೪೨ ಬಡಗಿ ಕೊಡಲಿಯನ್ನು ಹೆಗಲಮೇಲಿಟ್ಟು ಹುಡುಕಿದಂತೆ.
೧೪೩ ಮೊಲದ ಹಾಲು ಮದ್ದಿಗೆ ಬೇಕೆಂದರೆ, ಮುಳ್ಳಿನಲ್ಲಿ ಕುಳಿತು ಹಾಲು ಇಳಿಸಿತು.
೧೪೪ ಮಂಗನಿಗೆ ಸುರಾಪಾನ ಮಾಡಿಸಿದ ಹಾಗೆ.
೧೪೫ ಬೇಯುವ ತನಕ ಕುಳಿತುಕೊಂಡು, ಬೆಂದ ಮೇಲೆ ಹೋದನು.
೧೪೬ ಎತ್ತು ಕರು ಹಾಕಿತು ಅಂದರೆ, ಕೊಟ್ಟಿಗೆಯಲ್ಲಿ ಕಟ್ಟು ಅಂದಂತೆ.
೧೪೭ ಇಡೀ ರಾಮಾಯಣ ಕೇಳಿ, "ರಾಮನಿಗೆ ಸೀತೆ ಏನಾಗಬೇಕು?" ಎಂದು ಕೇಳಿದಂತೆ.
೧೪೮ ಜೇಡನ ಬಲೆ ಹಿಡಿದು ನೇಲುವವನ ಕಾಲನ್ನು ಇನ್ನೊಬ್ಬ ಹಿಡಿದು ನೇತಾಡಿದ.
೧೪೯ ಮಕ್ಕಳ ಮಾತಿಗೆ ಒಕ್ಕಲುತನ ಹೋದರು.
೧೫೦ ಹೆಂಡತಿ ಅಂದ್ರೆ ನಗುತ್ತಿದ್ದಾನೆ, ತಂದುಹಾಕೆಂದ್ರೆ ಅಳುತ್ತಿದ್ದಾನೆ.
೧೫೧ ಕೂತು ಕೂತು ಕುಂಬಾರನ ಕೈಹಿಡಿದಳು.
೧೫೨ ಕುಣಿಯಲಿಕ್ಕಾಗದವಳು ರಂಗಸ್ಥಳ ಓರೆಯೆಂದಳಂತೆ.
೧೫೩ ಹೊಟ್ಟೆಗಿಲ್ಲದ ಶ್ಯಾನುಭೋಗ ಹಳೆ ಲೆಕ್ಕ ಹುಡುಕಿದನಂತೆ.
೧೫೪ ಊರಿತ್ತು ಓಡುತ್ತದೆ ಅಂತ, ಹೇರಿತ್ತೂ ಓಡುತ್ತಿದೆ.
೧೫೫ ಮಗು ಇಲ್ಲದ ಮನೆಯಲ್ಲಿ, ಅಜ್ಜ ಅಂಬೆಗಾಲು ಇಡುತ್ತಾನೆ.
೧೫೬ ಅಪ್ಪ ಮದುವೆ ಅಂದನಂತೆ, ಮಗ "ಯಾರಿಗೆ?" ಅಂದನಂತೆ.
೧೫೭ ಇಲಿಯನ್ನು ಒಳಗೆ ಹಾಕಿ ಚೀಲ ಹೊಲಿದರು.

೧೫೮ ಉರಿಯುವ ಬೆಂಕಿಗೆ ತುಪ್ಪ ಹೊಯ್ದಂತೆ.

೧೫೯ ಎಣ್ಣೆ ಹಾಡ (ಕೊಡ) ಕೆಡೆದುಕೊಂಡವ ಅಳುತ್ತಾನಂತ, ಕಾಯಿ ಕೆಡೆದುಕೊಂಡವನೂ ಅತ್ತನು.

೧೬೦ ಹಂಡೆಯೊಳಗಿನ ತೊಂಡೆಕಾಯಿಯಂತೆ.

೧೬೧ ಪಥ್ಯಕೊಟ್ಟ ಕೈಕಚ್ಚುವಂತೆ.

೧೬೨ ತಿಂಗಳು ಊಟಮಾಡದೆ ಇದ್ದ ಮನೆಗೆ ತಂಗಳು ಊಟಮಾಡಲಿಕ್ಕೆ ಬಂದಿದ್ದಾನಂತೆ.

೧೬೩ ಹಗಲಿಗೆ ಹಾದರ ಮಾಡಿ, ರಾತ್ರಿ ಗಂಡನ ತಲೆ ಹೇನು ತೆಗೆದಳು.

೧೬೪ ಕಾಳಿನಾಯ್ಕನ ಪೀಳಿಗೆ ಎಲ್ಲರೂ ಒಂದೆ.

೧೬೫ ಇಪ್ಪತ್ತಕ್ಕೆ ಯಜಮಾನಿಕೆ ಸಿಕ್ಕಬಾರದು; ಎಪ್ಪತ್ತಕ್ಕೆ ಭೇದಿ ಸುರುವಾಗಬಾರದು.

೧೬೬ ಚಿಕ್ಕಾಸಿಗೆ ಆಸೆಮಾಡಿ ಕೋಶವನ್ನು ಕಳಕೊಂಡ.

೧೬೭ ಅವಿವೇಕವು ಕೇಡಿಗೆ ಕಾರಣ.

೧೬೮ ಇದ್ದುದರಲ್ಲಿ ತೃಪ್ತಿಪಡುವುದು, ದೊರೆತನಕ್ಕಿಂತಲೂ ಉತ್ತಮ.

೧೬೯ ಮೊದಲು ಕೆಲಸ, ಆ ಮೇಲೆ ಸಂತೋಷ.

೧೭೦ ಹತ್ತು ಕೈಗಳು ಸೇರಿದರೆ, ಬೆಟ್ಟವನ್ನಾದರೂ ಎತ್ತಬಹುದು.

೧೭೧ ಕೊಟ್ಟ ವಸ್ತುವಿನಲ್ಲಿ ದೋಷವೆಣಿಸಬಾರದು.

೧೭೨ ತೂಕಕ್ಕೆ ದಯವಿಲ್ಲ.

೧೭೩ ಪ್ರಾಯದಲ್ಲಿ ಜೂಜುಗಾರನಾದರೆ, ಮುದಿತನದಲ್ಲಿ ಭಿಕ್ಷುಕನಾಗಿ ಸಾಯಬೇಕಾದೀತು.

೧೭೪ ಲೋಭಿಯು ಸದಾ ದರಿದ್ರನು.

೧೭೫ ಕಾಗೆಯ ಹಿಂಡಿನಲ್ಲಿ ಕೋಗಿಲೆಯು ಸಿಕ್ಕಿದ ಹಾಗೆ.

೧೭೬ ಪಾಪಕ್ಕೆ ದುಃಖವೇ ಪ್ರತಿಫಲ.

೧೭೭ ನಾಣ್ಯವಿದ್ದರೆ ಮಾನ್ಯ.

೧೭೮ ಕ್ಷಮಾಗುಣವು ಧೀರರಿಗೆ ಸಲ್ಲುವುದು.

೧೭೯ ಅಣ್ಣಪ್ಪ ಮನೆಯಲ್ಲಿದ್ದರೂ ಸರಿ, ಸಂತೆಗೆ ಹೋದರೂ ಸರಿ.

೧೮೦ ಅವಿವೇಕಿಗಳ ಮಧ್ಯದಲ್ಲಿ ವಿವೇಕದಿಂದ ವರ್ತಿಸುವುದು ತಪ್ಪು.

೧೮೧ ಯಥಾರ್ಥವಾದ ಯೋಗ್ಯತೆಯು, ಆಳವಾದ ನದಿಯಂತೆ ನಿಶ್ಶಬ್ದ ವಾಗಿರುವುದು.

೧೮೨ ಮಾಡಿದವನ ಪಾಪ ಆಡಿದವನ ತಲೆಯ ಮೇಲೆ.

೧೮೩ ಉದ್ದವಾದರೆ ಭೇತಾಳ, ಕುಳ್ಳಾದರೆ ವಾಮನ.

೧೮೪ ಹರಾಮಿ ದೇವರಿಗೆ ಏಪ್ಪಾಸಿನ (ಎಕ್ಕಡ) ಪೂಜೆ.

೧೮೫ ಆನೆಯ ಹೊಟ್ಟೆಯಲ್ಲಿ ಅಚ್ಚೇರು ಬಂಗಾರ.

೧೮೬ ಊರಿಗೊಂದು ದಾರಿಯಾದರೆ ಪೋರನಿಗೊಂದು ದಾರಿ,

೧೮೭ ಹಳೆ ಗೆರಸಿಗೆ (ಮೊರ) ಸೆಗಣಿಯೇ ಆಧಾರ.

೧೮೮ ಮಾಯಿ ಕಣ್ಣಿಗೆ ಮರೆ, ಸೊಸೆ ಕಣ್ಣಿಗೆ ಹೊರೆ.

೧೮೯ ಹತ್ತು ಜನರ ಹಲ್ಲುಕಡ್ಡಿ ಒಬ್ಬನ ತಲೆಹೊರೆ.

೧೯೦ ಹೊಸ ಅಗಸ ಗೋಣಿ ಒಗೆದ.

೧೯೧ ಭಾವನ ಬಾಕುಡ್ತಿ (ಹೆಂಡತಿ) ಹೇಳುತ್ತಾ ಇರಲಿ, ಉಟ್ಟ ಕಪ್ಪಡ ಕೇಳುತ್ತಾ ಇರಲಿ.

೧೯೨ ಲಜ್ಜೆಯಿಲ್ಲದ ಹೇಂಟೆ, ಸಂತೆಯಲ್ಲಿ ಮೊಟ್ಟೆ ಇಟ್ಟಿತು.

೧೯೩ ಹಣ್ಣೆಲೆ ಉದುರುವಾಗ ಕಾಯೆಲೆ ನಗುತ್ತದೆ.

೧೯೪ ದಕ್ಷಿಣೆಗೆ ತಕ್ಕ ಪ್ರದಕ್ಷಿಣೆ.

೧೯೫ ಗಂಡನ ಒಟ್ಟಿಗೆ ಹೋದ ಹೆಂಗಸು, ಅನ್ನದ ಒಟ್ಟಿಗೆ ಹೋದ ನೀರು ಎರಡೂ ಒಂದೇ.

೧೯೬ ಅಜ್ಜಿ ಸಾಕಿದ ಮಕ್ಕಳು ಬೊಜ್ಜದ ಹೇಳಿಕೆಗೂ ಆಗರು.

೧೯೭ ಎಡಂತ್ರ (ಮಧ್ಯಕಾಲದಲ್ಲಿ) ಭಾಗ್ಯ ಬಂದರೆ, ಕೊಡೆಯೆಲ್ಲ ನಡುಗುವುದು.

೧೯೮ ಬರೀ ಗುಲ್ಲು ನಿದ್ರೆಗೇಡು.

೧೯೯ ಕಾಗೆ ಸತ್ತು ಹೇನು ಬಡವಾಯಿತು.

೨೦೦ ತನ್ನದ್ದು ಮಗು, ಬೇರೆಯವರದ್ದು ಕೂಸು.

೨೦೧ ವೈ ಸುಟ್ಟರೂ ಕಪ್ಪಡ ಸುಡಬಾರದು.

೨೦೨ ಮೀನಿನ ಹೆಜ್ಜೆ ತಿಳಿಯಬಹುದು; ಹೆಂಗಸರ ಹೃದಯ ತಿಳಿಯುವುದು ಕಷ್ಟ.

೨೦೩ ಬೆಕ್ಕಿಲ್ಲದ ಮನೆಗೆ ಇಲಿಯೇ ಯಜಮಾನ.

೨೦೪ ನೀರಿನ ಬಲದಲ್ಲಿ ಸಿಗಡಿ ಹಾರುವುದು.

೨೦೫ ಬೇಕಾದ ಮಾತು ಬೆಲ್ಲಕ್ಕಿಂತ ಸಿಹಿ.

೨೦೬ ಕೊಂದ ಕೊಲೆ ಬೆನ್ನು ಬಿಡದು.

೨೦೭ ಹತ್ತು ಸಲ ಕದ್ದವನು ಒಂದು ಸಲ ಸಿಕ್ಕಿಬೀಳುತ್ತಾನೆ.

೨೦೮ ಒಂದು ಮಳಿಗೆ ಒಂದು ಕೊಡೆ ಹರಿಯಬಾರದು.

೨೦೯ ರೊಕ್ಕ ಕಟ್ಟಿಕೊಂಡು ಭಿಕ್ಷೆ ಬೇಡುವುದು.

೨೧೦ ಸುಳ್ಳ್ಪಟಿಕ್ಕೆ ಶುಂಠಿ ತಿಂದು ಬಾಯೆಲ್ಲ ಉರಿ.

೨೧೧ ಬೇಸಾಯಗಾರ ಬೇಗ ಸಾಯ.

೨೧೨ ಊರು ಇದ್ದಲ್ಲಿ ಹೊಲಗೇರಿಯಿದೆ; ನೀರು ಇದ್ದಲ್ಲಿ ಕೆಸರಿದೆ.

೨೧೩ ಕಳ್ಳನ ಮುಖ ಹುಳ್ಳಹುಳ್ಳಗೆ.

೨೧೪ ಕಬ್ಬು ಸಿಹಿ ಉಂಟೆಂದು ಬೇರು ಸಹ ಜಗಿಯಬಾರದು.

೨೧೫ ಊರು ಒಳ್ಳೇದಾದರೆ, ಬೇಡಿ ತಿನ್ನಬಹುದು.

೨೧೬ ಕಡ ಹುಟ್ಟಿ ಬಡವ ಕೆಟ್ಟ.

೨೧೭ ಬೇಕಂತ ಸತ್ತು ಪಿಶಾಚಿಯಾಗಿ ಕಾಡುವುದು.

೨೧೮ ಸಮುದ್ರಕ್ಕೆ ಹೋದರೂ, ಪಾತ್ರ ಇದ್ದಷ್ಟೇ ನೀರು ತರಬಹುದು.

೨೧೯ ಸೂಜಿ ಕಳೆದುಹೋದದ್ದಕ್ಕೆ ರಾಶಿಪೂಜೆಯ ಹರಕೆ.

೨೨೦ ದೇವರ ಭಯವೇ ಜ್ಞಾನದ ಆರಂಭ.

೨೨೧ ಕೂಪ ಮಂಡೂಕದಂತೆ.

೨೨೨ ಆಪತ್ತಿನಲ್ಲಿ ಸಂಪತ್ತು.

೨೨೩ ಓದುವವನಿಗೂ ಒಂದೇ, ಓದಿಸುವವನಿಗೂ ಒಂದೇ.

೨೨೪ ಸಂಗದೋಷ ಕೊರಳಿಗೆ ದೊಣ್ಣೆ.

೨೨೫ ಕಲ್ಲಪ್ಪನನ್ನು ನಂಬಿ ಮೊಣಸಪ್ಪ ಕೆಟ್ಟ.

